ಫೆಬ್ರವರಿ – 2021

## ಲೇಖನಗಳು




ವಿನ್ಯಾಸ

ಧನರಾಜ್ ಎಂ.

ಮುಖಪುಟ ಛಾಯಾಚಿತ್ರ

ಹೇಮಂತ್ ಕುಮಾರ್ ಟಿ. ಎಮ್.

ಪರಿಷ್ಕರಣೆ

ಮುರಳಿ ಎಸ್.

ಶಿವಕುಮಾರಸ್ವಾಮಿ ಎಂ.

ಕರಡು ತಿದ್ದುಪಡಿ

ಡಾ.ದೀಪಕ್ ಭ., ಮೈಸೂರು




© ಪವನ್ ಕುಮಾರ್ ಟಿ. ಎಸ್.

# ಹೊಳೆಮತ್ತಿ

**ಸಾಮಾನ್ಯ ಹೆಸರು :** Arjuna tree

**ವೈಜ್ಞಾನಿಕ ಹೆಸರು** : *Terminalia arjuna*



©ನಾಗೇಶ್ ಓ. ಎಸ್. **ಹೊಳೆಮತ್ತಿ, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ**

ಹೊಳೆಮತ್ತಿ ಹೆಸರೇ ಸೂಚಿಸುವಂತೆ ಈ ಮರಗಳು ಹೆಚ್ಚಾಗಿ ಹೊಳೆ, ನದಿ, ತೊರೆ, ದಂಡೆಗಳ ಪಕ್ಕದಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಈ ಮರವನ್ನು ತೊರೆಮತ್ತಿ, ಹೊಳೆ ನೀರುಮತ್ತಿ ಎಂದೂ ಕರೆಯುತ್ತಾರೆ. ಇದನ್ನು ನೀರಿನ ದಂಡೆಯ ಹೊರತು ರಸ್ತೆಬದಿ, ಹೊಲ, ತೋಟಗಳಲ್ಲೂ ಕಾಣಬಹುದು. ಇದು ಸುಮಾರು 60 ರಿಂದ 80 ಅಡಿಗಳ ಎತ್ತರದ ತನಕ ಬೆಳೆಯುವ ಮರವಾಗಿದ್ದು, ಇದರ ಕಾಂಡವು ಬಿಳಿ, ಕಂದು ಹಾಗೂ ನಸುಗೆಂಪು ಬಣ್ಣಗಳಿಂದ ಕೂಡಿದೆ. ವರ್ಷವಿಡೀ ಹಸಿರಿನಿಂದ ಕೂಡಿರುವ ಈ ಮರವು ಮಾರ್ಚ್ ನಿಂದ ಜೂನ್ ತಿಂಗಳ ಅವಧಿಯಲ್ಲಿ ಹೂ ಬಿಡುತ್ತದೆ. ಬಿಳಿಯ ಪುಟ್ಟ ಪುಟ್ಟ ಹೂಗಳ ಗೊಂಚಲುಗಳು ನೋಡಲು ಬಿಳಿಯ ಕಡ್ಡಿಗಳಂತೆ ಕಾಣುತ್ತವೆ. ಇದರ ಕಾಯಿಗಳು ನಯವಾದ ಐದು ರೆಕ್ಕೆಗಳಿಂದಾಗಿದ್ದು, ಹಸಿರು, ಕೆಂಪು ಬಣ್ಣಗಳಿಂದ ಸುಂದರವಾಗಿ ಕಾಣುತ್ತವೆ. ಈ ಮರದ ವಿಶೇಷತೆ ಎಂದರೆ ಇದರ ಔಷಧೀಯ ಗುಣಗಳು. ಈ ಮರದ ತೊಗಟೆ ಹಾಗೂ ಎಲೆಗಳನ್ನು ಹೃದಯ ಸಂಬಂಧಿ ಖಾಯಿಲೆಗಳಿಗೆ ಔಷಧಿಯಾಗಿ ಬಳಸುತ್ತಾರೆ. ಅಲ್ಲದೆ ಇನ್ನಿತರ ಹಲವಾರು ಖಾಯಿಲೆಗಳಿಗೆ ಈ ಮರದ ತೊಗಟೆಯನ್ನು ಔಷಧಿಯಾಗಿ ಬಳಸುತ್ತಾರೆ.




# ಚಿಟ್ಟೆಯೋ...? ಪತಂಗವೋ...?

ನಾವು ನಮ್ಮ ಸುತ್ತಮುತ್ತಲಿನ ಪರಿಸರದಲ್ಲಿ ಅನೇಕ ವಿಧದ ಪ್ರಾಣಿ ಪಕ್ಷಿಗಳನ್ನು ನೋಡುತ್ತೇವೆ. ಈ ಜೀವಿಗಳು ಒಂದೇ ಸ್ಥಳಕ್ಕೆ ಸೀಮಿತವಾಗಿರದೆ ತಮ್ಮ  ಆಹಾರ, ವಿಹಾರ ಮತ್ತು ಜೈವಿಕ ಗುಣಲಕ್ಷಣಗಳಿಗೆ ಅನುಗುಣವಾಗಿ ಭೂಮಿಯ ತುಂಬ ಹರಡಿಕೊಂಡಿವೆ. ಅಂತೆಯೇ ಹೆಚ್ಚು ಹಚ್ಚ ಹಸಿರಿರುವ ಪ್ರದೇಶದಲ್ಲಿ ಅನೇಕ ಜೀವಿಗಳು ಕಂಡುಬಂದರೆ, ಮರಳುಗಾಡಿನಲ್ಲಿ ಅಷ್ಟೊಂದು ಜೀವಿಗಳು ಗೋಚರಿಸುವುದಿಲ್ಲ. ಅಲ್ಲದೆ ಕೆಲವು ಜೀವಿಗಳು ತಮ್ಮ ಆಹಾರ, ವಿಹಾರ, ವಸತಿ ಬೇರೆ ಬೇರೆಯಾಗಿದ್ದರೂ ಕೂಡ ಬಾಹ್ಯ ಲಕ್ಷಣದಲ್ಲಿ ಒಂದೇ ರೀತಿ ಕಾಣುತ್ತವೆ. ಅಂತೆಯೇ ಈ ಚಿಟ್ಟೆಗಳು ಮತ್ತು ಪತಂಗಗಳೂ ಕೂಡ ಬಾಹ್ಯ ಲಕ್ಷಣದಲ್ಲಿ ತಕ್ಷಣಕ್ಕೆ ಒಂದೇ ರೀತಿ ಕಂಡರೂ ಸಹ ಅವು ಬೇರೆ ಬೇರೆಯೇ ಆಗಿವೆ.

ಅತೀ ಸೂಕ್ಷ್ಮವಲಯಗಳಲ್ಲಿ ಒಂದಾದ ಸಹ್ಯಾದ್ರಿ ಎಂದು ಕರೆಯಲ್ಪಡುವ ಪಶ್ಚಿಮ ಘಟ್ಟಗಳು ಜೈವಿಕ ಭೂಗೋಳ ಪ್ರದೇಶಗಳಾಗಿದ್ದು, ಅತಿ ಹೆಚ್ಚು ಜೀವ ವೈವಿಧ್ಯತೆಯನ್ನು ಹೊಂದಿದೆ. ಪಶ್ಚಿಮ ಘಟ್ಟಗಳು ಭಾರತೀಯ ಪರ್ಯಾಯ ದ್ವೀಪದ ಪಶ್ಚಿಮ ಕರಾವಳಿಗೆ ಸಮಾನಾಂತರವಾಗಿ 1600 ಕಿಲೋಮೀಟರ್ ದೂರದಲ್ಲಿ 1,40,000 ಚದರ ಕಿಲೋಮೀಟರ್ ವಿಸ್ತೀರ್ಣವನ್ನು ಹೊಂದಿರುವ ಪರ್ವತ ಶ್ರೇಣಿಯಾಗಿದ್ದು, ತಮಿಳುನಾಡು, ಕೇರಳ, ಕರ್ನಾಟಕ, ಗೋವಾ, ಗುಜರಾತ್ ಮತ್ತು ಮಹಾರಾಷ್ಟ್ರ ರಾಜ್ಯಗಳಲ್ಲಿ ಹರಡಿಕೊಂಡಿದೆ. ಪಶ್ಚಿಮ ಘಟ್ಟಗಳು ಎಲೆ ಉದುರುವ ಕಾಡು, ನಿತ್ಯಹರಿದ್ವರ್ಣ ಕಾಡು, ಕುರುಚಲು ಕಾಡು, ಶೋಲಾ ಮತ್ತು ಸವನ್ನಾ ಹುಲ್ಲುಗಾವಲನ್ನು ಹೊಂದಿದೆ.

ಕರ್ನಾಟಕವು ಸಸ್ಯ ಮತ್ತು ಪ್ರಾಣಿ ಪ್ರಭೇದಗಳ ಸಮೃದ್ಧ ವೈವಿಧ್ಯತೆಯನ್ನು ಹೊಂದಿದ್ದು, ಪರಿಸರ ನಮತೋಲನವನ್ನು ಕಾಪಾಡುವಲ್ಲಿ ಈ ಪ್ರಭೇದಗಳು ಪ್ರಮುಖ ಪಾತ್ರವಹಿಸುತ್ತವೆ. ಅಲ್ಲದೆ ಕೇವಲ ಪಶ್ಚಿಮ ಘಟ್ಟಗಳಿಗೆ ಸೀಮಿತವಾದ ಕೆಲವು ಜೀವಿಗಳನ್ನು ಸಹ ಇಲ್ಲಿ ಕಾಣಬಹುದು (Endemism). ಇಲ್ಲಿ ಸುಮಾರು 4900 ಪ್ರಭೇದದ ಹೂ ಬಿಡುವ ಸಸ್ಯಗಳು, 139 ಪ್ರಭೇದದ ಸಸ್ತನಿಗಳು, 500 ಪ್ರಭೇದದ ಪಕ್ಷಿಗಳು, 179 ಪ್ರಭೇದದ ಕಪ್ಪೆಗಳು ಮತ್ತು 334 ಪ್ರಭೇದದ ಸರಿಸೃಪಗಳು ಇಲ್ಲಿವೆ ಎಂದು ಸಂಶೋಧನೆಯಿಂದ ತಿಳಿದು ಬಂದಿದೆ.

ಚಿಟ್ಟೆಗಳು ಮತ್ತು ಪತಂಗಗಳು ಲೆಪಿಡಾಪ್ಟೆರ ವರ್ಗಕ್ಕೆ (Lepidoptera) ಸೇರಿದ್ದು, ಅದರಲ್ಲಿ ಚಿಟ್ಟೆಗಳು ರೋಪಲೊಸೆರ (Rhopalocera) ಎಂಬ ಪ್ರವರ್ಗಕ್ಕೆ ಮತ್ತು ಪತಂಗಗಳು ಹೆಟೆರೊಸೆರ (Heterocera) ಎಂಬ ಪ್ರವರ್ಗಕ್ಕೆ ಸೇರಿವೆ. ಲೆಪಿಡಾಪ್ಟೆರ ವರ್ಗದಲ್ಲಿ ಸುಮಾರು 1,00,000 ಪ್ರಭೇದದ ಚಿಟ್ಟೆಗಳು ಮತ್ತು 1,27,000 ಪ್ರಭೇದದ ಪತಂಗಗಳು ಇವೆ ಎಂದು ಗುರುತಿಸಲಾಗಿದೆ.

## ಚಿಟ್ಟೆಗಳು ಮತ್ತು ಪತಂಗಗಳ ನಡುವಿನ ವ್ಯತ್ಯಾಸ

| ಕ್ರ. ಸಂ. | ಚಿಟ್ಟೆಗಳು | ಪತಂಗಗಳು |
|---|---|---|
| 01 | ಚಿಟ್ಟೆಗಳ ಮೀಸೆಯು (Antennae) ತೆಳುವಾಗಿದ್ದು, ತುದಿ ಭಾಗವು ದಪ್ಪವಾಗಿರುತ್ತದೆ ಹಾಗೂ ಕೂದಲುಗಳನ್ನು ಹೊಂದಿರುವುದಿಲ್ಲ. | ಪತಂಗಗಳ ಮೀಸೆಯು (Antennae) ದಪ್ಪವಾಗಿದ್ದು, ಚಿಕ್ಕ ಚಿಕ್ಕ ಕೂದಲುಗಳನ್ನು ಹೊಂದಿರುತ್ತದೆ ಹಾಗೂ ನೋಡಲು ಹಕ್ಕಿಯ ಪುಕ್ಕದಂತಿರುತ್ತದೆ. |
| 02 | ಚಿಟ್ಟೆಗಳು ತಮ್ಮ ಮೀಸೆಯನ್ನು ಯಾವಾಗಲು ಮುಖದ ಮುಂದಿಟ್ಟುಕೊಂಡಿರುತ್ತವೆ. | ಪತಂಗಗಳು ತಮ್ಮ ಮೀಸೆಯನ್ನು ಯಾವಾಗಲು ರೆಕ್ಕೆಯ ಸಮೀಪದಲ್ಲಿ ಇಟ್ಟುಕೊಂಡಿರುತ್ತವೆ. |
| 03 | ಚಿಟ್ಟೆಗಳು ವಿಶ್ರಾಂತ ಸ್ಥಿತಿಯಲ್ಲಿ ರೆಕ್ಕೆಗಳನ್ನು ಮಡಚಿಕೊಂಡಿರುತ್ತವೆ. | ಪತಂಗಗಳು ವಿಶ್ರಾಂತ ಸ್ಥಿತಿಯಲ್ಲಿ ರೆಕ್ಕೆಗಳನ್ನು ಬಿಚ್ಚಿಕೊಂಡಿರುತ್ತವೆ. |
| 04 | ಚಿಟ್ಟೆಗಳು ಸಣ್ಣದಾದ ಹೊಟ್ಟೆಯನ್ನು ಹೊಂದಿರುತ್ತವೆ. | ಪತಂಗಗಳು ದಪ್ಪದಾದ ಹೊಟ್ಟೆಯನ್ನು ಹೊಂದಿರುತ್ತವೆ. |
| 05 | ಚಿಟ್ಟೆಗಳ ಮೊಟ್ಟೆಗಳು ದುಂಡಾಗಿ ಅಥವಾ ಚಪ್ಪಟೆಯಾಗಿರುತ್ತವೆ. | ಪತಂಗಗಳ ಮೊಟ್ಟೆಗಳು ದುಂಡಾಗಿ, ಬಾಟಲ್ ಅಥವಾ ತಟ್ಟೆ ಆಕಾರದಲ್ಲಿರುತ್ತವೆ. |
| 06 | ಚಿಟ್ಟೆಗಳ ಮರಿ ಹುಳಗಳ ಮೈ ಮೇಲಿನ ಕೂದಲಿನ ರಚನೆ ಚುಚ್ಚುವುದಿಲ್ಲ. | ಪತಂಗಗಳು ಮರಿ ಹುಳಗಳ ಮೈ ಮೇಲಿನ ಕೂದಲಿನ ರಚನೆ ಚುಚ್ಚುತ್ತದೆ. |
| 07 | ಚಿಟ್ಟೆಗಳು ಆಕರ್ಷಕ ಗಾಢ ಬಣ್ಣದ್ದಾಗಿರುತ್ತದೆ. | ಪತಂಗಗಳು ಮಂದ ಬಣ್ಣದ್ದಾಗಿರುತ್ತವೆ. |
| 08 | ಚಿಟ್ಟೆಗಳು ಹಗಲಿನಲ್ಲಿ ಸಂಚರಿಸುತ್ತವೆ. | ಪತಂಗಗಳು ಹೆಚ್ಚಾಗಿ ರಾತ್ರಿ ವೇಳೆಯಲ್ಲಿ ಸಂಚರಿಸುತ್ತವೆ. |


Butterfly


Moth

## ಚಿಟ್ಟೆಗಳು ಮತ್ತು ಪತಂಗಗಳ ಜೀವನ ಚಕ್ರ




ಚಿಟ್ಟೆಗಳು ಮತ್ತು ಪತಂಗಗಳು ತಮ್ಮ ಜೀವಿತಾವಧಿಯಲ್ಲಿ ನಾಲ್ಕು ವಿಭಿನ್ನ ಹಂತಗಳನ್ನು ಒಳಗೊಂಡು ಸಂಪೂರ್ಣ ರೂಪಾಂತರಕ್ಕೆ ಒಳಗಾಗುತ್ತದೆ. ಅವುಗಳೆಂದರೆ ಮೊಟ್ಟೆ, ಕಂಬಳಿ ಹುಳು, ಪೊರೆ ಹುಳು ಮತ್ತು ವಯಸ್ಕ ಹಂತ.

ಚಿಟ್ಟೆಗಳು ಮತ್ತು ಪತಂಗಗಳು ಆರೋಗ್ಯಕರ ಪರಿಸರ ವ್ಯವಸ್ಥೆಯ ಸೂಚಕವಾಗಿದ್ದು (Biological indicator), ಇವುಗಳು ಸಮೃದ್ಧವಾಗಿರುವ ಪ್ರದೇಶದಲ್ಲಿ ಇತರ ಕಶೇರುಕಗಳ ಸಂಖ್ಯೆ ಕೂಡ ಸಮೃದ್ಧವಾಗಿರುತ್ತದೆ ಎಂದು ಸಂಶೋಧನೆಗಳಲ್ಲಿ ಹೇಳಲಾಗಿದೆ. ಅನೇಕ ಸಸ್ಯಗಳ ನೈಸರ್ಗಿಕ ಪರಾಗಸ್ಪರ್ಶ ಮತ್ತು ಕೀಟ ನಿಯಂತ್ರಣ ಸೇರಿದಂತೆ ವ್ಯಾಪಕವಾದ ಪ್ರಯೋಜನವನ್ನು ಇವು ಪರಿಸರಕ್ಕೆ ಒದಗಿಸಿಕೊಡುತ್ತವೆ. ಅಲ್ಲದೆ ಆಹಾರ ಸರಪಳಿಯ ಒಂದು ಭಾಗವಾಗಿದ್ದು, ಪಕ್ಷಿಗಳು, ಹಲ್ಲಿಗಳು ಮತ್ತು ಇನ್ನಿತರ ಕೀಟ ಭಕ್ಷಕಗಳು ಇವುಗಳನ್ನು ಬೇಟೆಯಾಡುತ್ತವೆ ಹಾಗೆಯೇ ಜೀವವೈವಿಧ್ಯತೆಯ ಸಮೃದ್ಧತೆಯನ್ನು ಹೆಚ್ಚಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಇವುಗಳು ಸುಂದರವಾಗಿರುವುದರಿಂದ ಪ್ರಕೃತಿಯ ನೈಸರ್ಗಿಕ ಭೂದೃಶ್ಯದ ಸೌಂದರ್ಯವನ್ನು ಸಹ ಹೆಚ್ಚಿಸುತ್ತವೆ.

ಅನೇಕ ವಿಸ್ಮಯಗಳನ್ನೊಳಗೊಂಡಿರುವ ಅತೀ ಸುಂದರ ಜೀವಿಗಳಲ್ಲಿ ಚಿಟ್ಟೆ ಮತ್ತು ಪತಂಗಗಳು ಜೈವಿಕ ಸರಪಳಿಯ ಮುಖ್ಯ ಕೊಂಡಿಯಾಗಿದ್ದು, ಇವುಗಳ ಸಂತತಿ ದಿನೇ ದಿನೇ ಕ್ಷೀಣಿಸುತ್ತಿರುವುದು ಗಣನೆಗೆ ತೆಗೆದುಕೊಳ್ಳಬೇಕಾದ ವಿಷಯವೇ ಸರಿ. ಮಾನವ ತನ್ನ ಸುಖಕ್ಕಾಗಿ ಜೀವಿಗಳ ಜೀವನಕ್ಕೆ ಆಧಾರವಾದ ಮರ-ಗಿಡಗಳನ್ನು ಕಡಿದು ಇಂತಹ ಅನೇಕ ಜೀವಿಗಳ ಬದುಕನ್ನೇ ನಾಶ ಮಾಡುತ್ತಿದ್ದಾನೆ. 'ಒಂದು ಮರ ಹಲವು ಜೀವಸಂಕುಲ' ಎಂಬಂತೆ ಮರ-ಗಿಡಗಳು ಪ್ರತಿಯೊಂದು ಜೀವಿಯ ಬದುಕಿಗೆ ಆಸರೆಯಾಗಿರುತ್ತದೆ. ಆದ್ದರಿಂದ ನಮ್ಮ ಕೈಲಾದಷ್ಟು ಮರ ಗಿಡಗಳನ್ನು ಉಳಿಸಿ ಬೆಳೆಸೋಣ.

## ಪಶ್ಚಿಮ ಘಟ್ಟಗಳಲ್ಲಿ ಕಂಡುಬರುವ ಕೆಲವು ಚಿಟ್ಟೆಗಳು




ಪಟ್ಟೆ ಕಾಕ (Double Branded crow)
ಕುಟುಂಬ: ನಿಮ್ಫಾಲಿಡೆ (Nymphalidea)
ರೆಕ್ಕೆಯ ಅಳತೆ: 95-105 ಮಿ. ಮೀ.




ಸ್ಫಟಿಕ (Danaid Eggfly)
ಕುಟುಂಬ: ನಿಮ್ಫಾಲಿಡೆ (Nymphalidea)
ರೆಕ್ಕೆಯ ಅಳತೆ: 70-85 ಮಿ. ಮೀ.




ಹುಲ್ಲು ಭೂತ (Grass Demon)
ಕುಟುಂಬ: ಹೆಸ್ಪೆರಿಡೆ (Hesperiidae)
ರೆಕ್ಕೆಯ ಅಳತೆ: 40-48 ಮಿ. ಮೀ.




ಹಸುರು ಕಣ್ಣು (Double Banded Judy)
ಕುಟುಂಬ: ಪ್ಯಾಪಿಲಿಯೊನಿಡಿಯಾ (Papilionidea)
ರೆಕ್ಕೆಯ ಅಳತೆ: 40-50 ಮಿ. ಮೀ.




ನಿಂಬಿ (Lime butterfly)
ರೆಕ್ಕೆಯ ಅಳತೆ: 80-100 ಮಿ. ಮೀ.
ಕುಟುಂಬ: ಪ್ಯಾಪಿಲಿಯೊನಿಡಿಯಾ (Papilionidea)




ಸಂಚಾರಿ (Cruiser )
ರೆಕ್ಕೆಯ ಅಳತೆ: 72-110 ಮಿ. ಮೀ.
ಕುಟುಂಬ: ನಿಮ್ಫಾಲಿಡೆ (Nymphalidea)

## ಪಶ್ಚಿಮ ಘಟ್ಟಗಳಲ್ಲಿ ಕಂಡುಬರುವ ಕೆಲವು ಪತಂಗಗಳು




ದೊಡ್ಡ ಕಣ್ಣಿನ ಗೂಬೆ ಪತಂಗ (Large eyed owl moth)
ಕುಟುಂಬ: ನೋಕ್ಟುಯಿಡಿಯಾ (Noctuoidea)
ರೆಕ್ಕೆಯ ಅಳತೆ: 134-160 ಮಿ. ಮೀ.




ಕೆಂಪು ಸ್ಲಗ್ ಪತಂಗ (Red slug moth)
ಕುಟುಂಬ: ಜೈಗೆನೊಯಿಡಿಯಾ Zygaenoidea)
ರೆಕ್ಕೆಯ ಅಳತೆ: 50-56 ಮಿ. ಮೀ.




ಸಾಮಾನ್ಯ ಗೂಬೆ ಪತಂಗ (Common Owlet moth)
ಕುಟುಂಬ: ನೋಕ್ಟುಯಿಡಿಯಾ (Noctuoidea)
ರೆಕ್ಕೆಯ ಅಳತೆ: 66-85 ಮಿ. ಮೀ.




ವಿಶಾನೌ ಲೋಪೆಟ್ ಪತಂಗ (Vishanou loppet moth)
ಕುಟುಂಬ: ಲ್ಯಾಸಿಯೊಕಾಂಪೊಯಿಡಿಯಾ (Lasiocampoidea)
ರೆಕ್ಕೆಯ ಅಳತೆ: 47-67 ಮಿ. ಮೀ.




ಸೈನ್ಯ ಹಸಿರು ಪತಂಗ (Army Green Moth)
ಕುಟುಂಬ: ಬಾಂಬಿಕೋಯಿಡಿಯಾ (Bombycoidea)
ರೆಕ್ಕೆಯ ಅಳತೆ: 90-110 ಮಿ. ಮೀ.




ಕಪ್ಪು ಚುಕ್ಕೆಯ ನಕ್ಸ ಪತಂಗ (Naxa species)
ಕುಟುಂಬ: ಜಿಯೊಮೆಟ್ರೊಯಿಡಿಯಾ
(Geometroidea)




ನೀಲಿ ಹುಲಿ ಪತಂಗ (Blue Tiger Moth)
ಕುಟುಂಬ: ಜಿಯೊಮೆಟ್ರೊಯಿಡಿಯಾ (Geometroidea)
ರೆಕ್ಕೆಯ ಅಳತೆ: 50-85 ಮಿ. ಮೀ.




ಬೆಳ್ಳಿ ಪಟ್ಟೆ ಗಿಡುಗ ಪತಂಗ (Silver striped hawk moth)
ಕುಟುಂಬ: ಬಾಂಬಿಕೋಯಿಡಿಯಾ (Bombycoidea)
ರೆಕ್ಕೆಯ ಅಳತೆ: 54-80 ಮಿ. ಮೀ

# ಕಂಬಳಿಹುಳುಗಳು




ಕಂಬಳಿಹುಳು (Tussock moth caterpillar)




ಕಂಬಳಿಹುಳು (Southern Birdwing Butterfly caterpillar)




ಕಂಬಳಿಹುಳು (moth caterpillar)




ಕಂಬಳಿಹುಳು (Common Jay Butterfly caterpillar)

ಲೇಖನ : **ಸೌಮ್ಯ ಅಭಿನಂದನ್**

**ಶಿವಮೊಗ್ಗ ಜಿಲ್ಲೆ**




# ಬಾಲದಂಡೆ ಹಕ್ಕಿ

ಕಾಡಿನ ಸೊಬಗು ನೋಡುಗರಿಗೆ ಬಲು ಸೊಗಸು. ಆದರೆ ಕೆಲವೊಂದು ಪ್ರಾಣಿ-ಪಕ್ಷಿಗಳು ತನ್ನ ವಿಚಿತ್ರ ಮತ್ತು ವಿಭಿನ್ನ ಗುಣಲಕ್ಷಣ ಹಾಗೂ ಬಣ್ಣಗಳಿಂದ ನೋಡುಗರನ್ನು ಮನಸೂರೆಗೊಳಿಸುತ್ತವೆ. ಅಂತಹ ವಿಶಿಷ್ಟ ಗುಣಲಕ್ಷಣ ಹಾಗೂ ಬಣ್ಣಗಳಿಂದ ಕೂಡಿದ ಪಕ್ಷಿ ಈ ರಾಜಹಕ್ಕಿ ಅಥವಾ ಬಾಲದಂಡೆ ಹಕ್ಕಿ..

ಇವುಗಳು ನೋಡಲು ಸುಂದರವಾದ ಪಕ್ಷಿಗಳು ಅದರಲ್ಲೂ ಗಂಡು ಪಕ್ಷಿಗೆ ರಿಬ್ಬನ್ನಿನಂತಹ ಉದ್ದನೆಯ ಬಾಲ ಮತ್ತು ದೇಹ ಬಿಳಿ ಬಣ್ಣದಿಂದ ಕೂಡಿದ್ದು, ನೋಡಲು ಅತ್ಯಾಕರ್ಷಕವಾಗಿ ಕಾಣುತ್ತದೆ. ಈ ಉದ್ದನೆಯ ಬಾಲ ಮತ್ತು ಬಿಳಿ ಬಣ್ಣದ ಪಕ್ಷಿ ಬೆಳೆಯುತ್ತಾ ರೂಪುಗೊಳ್ಳುತ್ತದೆ. ಇವುಗಳು ಹಾರಾಡುತ್ತಲೆ ತಮ್ಮ ಬೇಟೆ, ಅಂದರೆ ನೊಣ, ಕೀಟ, ಚಿಟ್ಟೆ ಇತ್ಯಾದಿಗಳನ್ನು ಹಿಡಿಯುತ್ತವೆ. ಆದ್ದರಿಂದ ಇವುಗಳಿಗೆ ನೊಣ ಹಿಡುಕ (ಫ್ಲೈ ಕ್ಯಾಚರ್ಸ್) ಎನ್ನುತ್ತಾರೆ. ರಾಜಹಕ್ಕಿಗಳು ಆಕ್ರಮಣಕಾರಿ ಹಕ್ಕಿಗಳು. ಇವು ಗೂಡು ಕಟ್ಟಿ ಮೊಟ್ಟೆಯಿಡುವ ಸ್ಥಳಕ್ಕೆ ಯಾವುದೇ ಭಕ್ಷಕ ಪ್ರಾಣಿ ಅಥವಾ ಪಕ್ಷಿಗಳನ್ನು ಹತ್ತಿರ ಸುಳಿಯಲು ಬಿಡುವುದಿಲ್ಲ, ಅವು ಹಾವುಗಳೆ ಆಗಿರಲಿ ಅಥವಾ ಬಿಜ್ಜುಗಳೆ ಆಗಿರಲಿ ಅವುಗಳನ್ನು ಬೆದರಿಸುತ್ತವೆ. ಗಂಡು-ಹೆಣ್ಣು ಎರಡು ಸೇರಿ ಸಮಾನವಾದ ಕೆಲಸದಿಂದ ಮರದ ಕೊಂಬೆಗಳಲ್ಲಿ ಬಟ್ಟಲಿನಾಕಾರದ ಗೂಡನ್ನು ಕಟ್ಟುತ್ತವೆ, ಮೊಟ್ಟೆ ಇಟ್ಟು ಮರಿ ಮಾಡಿ ಗಂಡು ಹೆಣ್ಣು ಎರಡೂ ಸಹ ತನ್ನ ಮರಿಗಳಿಗೆ ಆಹಾರ ಒದಗಿಸುತ್ತವೆ.

ಸಾಮಾನ್ಯವಾಗಿ ಮೂರರಿಂದ ನಾಲ್ಕು ಮೊಟ್ಟೆ ಇಟ್ಟು ಮರಿ ಮಾಡುತ್ತವೆ. ಆಹಾರ ಒದಗಿಸುವಲ್ಲೂ ಗಂಡು-ಹೆಣ್ಣು ಜೊತೆಯಲ್ಲಿರುತ್ತವೆ. ಮರಿಗಳು ಸುಮಾರು 15 ರಿಂದ 20 ದಿನಗಳಲ್ಲಿ ದೊಡ್ಡವಾಗುತ್ತವೆ. ಸ್ವಲ್ಪ ಬಲಿತು ದೊಡ್ಡದಾದ ಮರಿ ಮೊದಲು ಗೂಡಿನಿಂದ ಹೊರಬಂದು ಗೂಡಿನ ಪಕ್ಕದ ಕೊಂಬೆಯಲ್ಲಿ ಕೂರುತ್ತದೆ, ಅದಕ್ಕೆ ಆಹಾರವನ್ನು ಅದರ

ಪೋಷಕರು ಅಲ್ಲೇ ನೀಡುತ್ತವೆ. ಒಂದು ಮರಿ ಗೂಡಿನಿಂದ ಹೊರಗೆ ಬಂದ ಒಂದು ಅಥವಾ ಎರಡು ದಿನಗಳಲ್ಲಿ ಉಳಿದ ಮರಿಗಳು ಹೊರಬರುತ್ತವೆ. ಬಂದು ಸ್ವತಂತ್ರವಾಗುತ್ತವೆ. ಅನಂತರ ಆ ಖಾಲಿ ಗೂಡಿನಲ್ಲಿ ಮತ್ತೆ ಬೇರೆ ಹಕ್ಕಿಯಾಗಲೀ ಅಥವಾ ಅದೇ ಪಕ್ಷಿಯಾಗಲೀ ಮೊಟ್ಟೆ ಇಟ್ಟು ಮರಿಮಾಡುವುದಿಲ್ಲ..

ಮುಂದಿನ ಬಾರಿ ಅದೇ ಕೆಲಸ, ಹೊಸ ಗೂಡು, ಹೊಸ ಜೀವನ...




ಲೇಖನ : **ನಾಗೇಶ್ ಕೆ. ಜಿ.**

**ರಾಮನಗರ ಜಿಲ್ಲೆ**




# ಗಂಡು ನವಿಲಿನ ಅಧಿಪತ್ಯ

ನವಿಲು ನಮ್ಮ ರಾಷ್ಟ್ರೀಯ ಪಕ್ಷಿ. ಬಣ್ಣ ಬಣ್ಣದ ಗರಿಗಳಿಂದ ಎಲ್ಲರ ಮನಸೂರೆಗೊಳಿಸುತ್ತದೆ. ನಮ್ಮ ಕವನ, ಕಥೆ ಮತ್ತು ಸಿನಿಮಾಗಳಲ್ಲಿ ವಿಶಿಷ್ಟ ಸ್ಥಾನ ಪಡೆದಿದೆ. ಅಂತೆಯೇ ಈ ಮೊದಲು ನವಿಲಿನ ಗರಿಗಳನ್ನು ಲೇಖನಿಯಾಗಿ ಬಳಸಿದ್ದುಂಟು. ಸಾಧು-ಸಂತರ ಚಾಮರ ಸೇವೆಯಲ್ಲಿ ಈಗಲೂ ಬಳಕೆಯಲ್ಲಿದೆ.

ಸಾಮಾನ್ಯವಾಗಿ ಭಾರತದೆಲ್ಲೆಡೆ ಕಾಣಸಿಗುವ ಈ ಹಕ್ಕಿಯ ಜೀವಶಾಸ್ತ್ರೀಯ ಹೆಸರು ಪಾವೋ ಕ್ರಿಸ್ಟಾಟಸ್. ಗಂಡು ಹಕ್ಕಿಗಳು 180 ರಿಂದ 230 ಸೆ.ಮೀ. ಬೆಳೆದರೆ ಹೆಣ್ಣು ಹಕ್ಕಿಗಳು 90 ರಿಂದ 100 ಸೆ.ಮೀ. ಬೆಳೆಯಬಲ್ಲವು. ಗಂಡು ಹಕ್ಕಿಗೆ ನೀಲಿ ಬಣ್ಣದ ಕತ್ತು ಮತ್ತು ಎದೆಯಿದ್ದು ಹೊಳಪಿನ ಹಸಿರು ಬಣ್ಣದ ಉದ್ದದ ಬಾಲದ ಗರಿಗಳಲ್ಲಿ ವರ್ಣರಂಜಿತ ಕಣ್ಣುಗಳಿರುತ್ತವೆ. ಹೆಣ್ಣು ಹಕ್ಕಿಗೆ ಮಾಸಲು ಬಿಳಿಯ ಕತ್ತು ಮತ್ತು ಹೊಟ್ಟೆಯಿದೆ. ಯಾವುದೇ ಆಕರ್ಷಕ ಗರಿಗಳಿಲ್ಲ. ಗಂಡು ಮತ್ತು ಹೆಣ್ಣುಗಳೆರಡರಲ್ಲಿಯೂ ತಲೆಯ ಮೇಲೆ ಜುಟ್ಟು ಇರುತ್ತದೆ. ಕಹಳೆಯಿಂದ ಬಂದಂತಹ ಸ್ವರದಂತೆ ಕೂಗು.

ಕುದುರೆಮುಖ ಪರ್ವತ ಶ್ರೇಣಿಗಳ ತಪ್ಪಲಿನಲ್ಲಿ, ಉಡುಪಿ-ಧರ್ಮಸ್ಥಳ ಹೆದ್ದಾರಿಯ ಮಧ್ಯೆ ಇರುವ ‘ನಾರಾವಿ’ಯೆಂಬ ಹಳ್ಳಿಯ ಮನೆಯ ಮುಂದಿನ ಬಯಲಿನಲ್ಲಿ ರೋಮಾಂಚನಗೊಳಿಸುವ ಎರಡು ಗಂಡು ನವಿಲುಗಳ ಕಾದಾಟದ ದೃಶ್ಯ ಕ್ಯಾಮರ ಕಣ್ಣಿನಲ್ಲಿ ಸೆರೆಯಾಯಿತು. ಉದ್ದಬಾಲದ ವಯಸ್ಕ ಗಂಡು ಸಣ್ಣಬಾಲದ ಯುವ ಗಂಡು ಹಕ್ಕಿಯೊಂದಿಗೆ ತನ್ನ ಶಕ್ತಿ ತೋರ್ಪಡಿಸುವ ಕ್ರಿಯೆ ನಡೆದಿತ್ತು. ಆ ದೃಶ್ಯ ಕರಾವಳಿ

ಕರ್ನಾಟಕದ ಹೆಸರುವಾಸಿ ಮನರಂಜಕ ಕ್ರೀಡೆ, ಕೋಳಿ ಅಂಕದ ಕಾದಾಟವನ್ನು ನೆನಪಿಸಿತು. ಮಾರಾಣಾಂತಿಕವಲ್ಲದಿದ್ದರೂ ತನ್ನ ಸುತ್ತಲಿನ ಜಾಗದ ಮತ್ತು ಮಿಲನಕ್ಕೆ ಸಜ್ಜಾಗಿರುವ ಅಧಿಪತ್ಯಕ್ಕಾಗಿ ಕಾದಾಟ ನಡೆದಿತ್ತು. ಎರಡು ಹಕ್ಕಿಗಳು ಹೆಚ್ಚು ಹೆಚ್ಚು ಎತ್ತರಕ್ಕೆ ಎಗರಿ ತನ್ನ ಕಾಲುಗಳ ಉಗುರುಗಳಿಂದ ವಿರೋಧಿಯನ್ನು ಹಣಿಸುವ ಕ್ರಿಯೆ ಜರುಗಿತ್ತು. ಬಲಿಷ್ಠ ಹಕ್ಕಿಯ ಶಕ್ತಿ ಪ್ರದರ್ಶನವಾದ ಕೂಡಲೇ ಇನ್ನೂ ಕಲಿಯಬೇಕಿದ್ದ ಯುವ ಹಕ್ಕಿ ತನ್ನ ಸರದಿ ಬಂದಾಗ ನೋಡಿಕೊಳ್ಳುವೆ ಎಂದುಕೊಂಡು ಪೊದೆಗಳಲ್ಲಿ ಮರೆಯಾಯಿತು. ಶಕ್ತಿಯುತ ಜೀವಿ ಉಳಿಯುವಂತಾಗಲಿ ಎಂಬ ಪ್ರಕೃತಿಯ ನಿಯಮದ ಪರಿಪಾಲನೆಯಷ್ಟೇ ಈ ಕಾದಾಟದ ಉದ್ದೇಶ. ತನ್ನದೇ ಇತಿಮಿತಿಯಲ್ಲಿ ಶಕ್ತಿ ಪ್ರದರ್ಶಿಸಿ ಪಾರಮ್ಯ ಮೆರೆಯುವ ಅವಕಾಶವಷ್ಟೇ. ಮನುಷ್ಯರಂತಹ ಧೂರ್ತತನದ ಕಲ್ಮಶಯುಕ್ತ ಹೋರಾಟವಲ್ಲವದು. ಮುಂದಿನ ಪೀಳಿಗೆ ಆರೋಗ್ಯ ಪೂರ್ಣವಾಗಿದ್ದು, ಪರಿಸರದಲ್ಲಿನ ಏರುಪೇರುಗಳನ್ನು ಸಹಿಸಿಕೊಂಡು ಬದುಕುವ, ಸಂತತಿ ಮುಂದುವರಿಯಲು ಅನುಕೂಲವಾಗುವ ಡಿ.ಎನ್.ಎ. ಜೀವತಂತು(ಜೀನ್ಸ್) ಇರುವ ವೀರ್ಯಾಣು ಉತ್ಪಾದಿಸುವ ಶಕ್ತಿಶಾಲಿಯ ಪ್ರದರ್ಶನ ಮಾತ್ರ.




**ಲೇಖನ:** ಡಾ. ಎಸ್. ಶಿಶುಪಾಲ

ದಾವಣಗೆರೆ ಜಿಲ್ಲೆ




# ಜೈವಪ್ರಕಾಶಕ ಅಣಬೆಗಳು

ಸಾಮಾನ್ಯವಾಗಿ ಎಲ್ಲರಿಗೂ ಅಣಬೆಗಳ ಪರಿಚಯವಿದೆ. ಆದರೆ ಕೆಲವು ವಿಶೇಷ ರೀತಿಯ ಅಣಬೆಗಳ ಬಗ್ಗೆ ಎಲ್ಲರಿಗೂ ತಿಳಿದಿಲ್ಲ. ಅಂತಹುದರಲ್ಲಿ ಈ ಜೈವಪ್ರಕಾಶಕ ಅಣಬೆಯೂ ಒಂದು. ಜೀವಿಗಳಿಂದ ಹೊರಸೂಸಲ್ಪಡುವ ಬೆಳಕನ್ನೇ ಜೈವಪ್ರಕಾಶನ ಅಥವಾ ಜೈವದೀಪ್ತಿ (Bioluminescemce) ಎನ್ನುತ್ತಾರೆ. ಇದಕ್ಕೆ ಉತ್ತಮ ಉದಾಹರಣೆ ಮಿಂಚುಹುಳು. ಮಿಂಚುಹುಳುಗಳಂತೆಯೇ ಜೈವಪ್ರಕಾಶಕ ಅಣಬೆಗಳು ಸಹ ತಮ್ಮಲ್ಲಿ ನಡೆಯುವ ಕೆಲವು ಜೀವರಾಸಾಯನಿಕ ಕ್ರಿಯೆಗಳಿಂದ ಬೆಳಕನ್ನು ಹೊರಹೊಮ್ಮುವ ಗುಣವನ್ನು ಪಡೆದಿವೆ.

ವಿಶ್ವದಾದ್ಯಂತ ಸುಮಾರು 70 ಪ್ರಭೇದದ ಜೈವಪ್ರಕಾಶಕ ಅಣಬೆಗಳನ್ನು ಗುರುತಿಸಲಾಗಿದ್ದು, ಅದರಲ್ಲಿ ಕೆಲವು ಪ್ರಭೇದದ ಅಣಬೆಗಳು ಭಾರತದ ಪಶ್ಚಿಮ ಘಟ್ಟಗಳಲ್ಲಿಯೂ ಕಾಣಸಿಗುತ್ತವೆ. ಜುಲೈ ನಿಂದ ಸೆಪ್ಟಂಬರ್ ಸಮಯದಲ್ಲಿ ಇವುಗಳನ್ನು ಗಮನಿಸಬಹುದಾಗಿದೆ. ಹಸಿರು ಬಣ್ಣದ ಬೆಳಕನ್ನು ಸೂಸುವ ಈ ಅಣಬೆಗಳು ಕೊಳೆತ ಮರದ ಮೇಲೆ ಬೆಳೆಯುತ್ತವೆ ಮತ್ತು ಸೂಕ್ಷ್ಮವಾಗಿ ಗಮನಿಸಿದರೆ ಬರಿಗಣ್ಣಿಗೆ ಕಾಣಿಸುತ್ತವೆ. ಮೊದಲಿಗೆ ಈ ಬೆಳಕಿನ ಮೂಲ ರಹಸ್ಯವಾಗಿದ್ದರೂ ಹಲವಾರು ಅಧ್ಯಯನದ ನಂತರ ಬೆಳಕಿನ ಮೂಲವನ್ನು ವಿಜ್ಞಾನಿಗಳು ಕಂಡುಹಿಡಿದಿದ್ದಾರೆ. ಈ ಜೀವಿಗಳಲ್ಲಿ ನಡೆಯುವ ಜೀವರಾಸಾಯನಿಕ ಕ್ರಿಯೆಗಳಿಂದ ರಾಸಾಯನಿಕ ಶಕ್ತಿಯು ಬೆಳಕಿನ ಶಕ್ತಿಯಾಗಿ

ಪರಿವರ್ತನೆಗೊಳ್ಳುತ್ತದೆ. ಲ್ಯೂಸಿಫರಿನ್ ಎಂಬ ಸಂಯುಕ್ತ ವಸ್ತುವು ಲ್ಯೂಸಿಫರೆಸ್ ಕಿಣ್ವ ಹಾಗೂ ಆಮ್ಲಜನಕದೊಂದಿಗೆ ಸೇರಿ ಈ ಪರಿವರ್ತನೆಯಲ್ಲಿ ಪಾಲ್ಗೊಳ್ಳುತ್ತದೆ.




ಈ ಬೆಳಕಿಗೆ ಆಕರ್ಷಿತವಾಗಿ ಕೆಲವು ಕೀಟಗಳು ಅಣಬೆಯನ್ನು ಸ್ಪರ್ಶಿಸಿ ಬೀಜಾಣುಗಳ ಪ್ರಸರಣಕ್ಕೆ ಸಹಾಯ ಮಾಡುತ್ತವೆ.

ಈ ಸೋಜಿಗ ಜಗತ್ತಿನಲ್ಲಿ ಬುದ್ಧಿವಂತ ಎಂದು ಬೀಗುತ್ತಿರುವ ಮನುಷ್ಯನು ಬೆಳಕಿಗಾಗಿ ಬೇರೆಯವರನ್ನು ಅವಲಂಬಿಸಿರುವಾಗ ತನ್ನದೇ ಸ್ವಂತ ಬೆಳಕನ್ನು ತಯಾರಿಸುವ ಇಂತಹ ಜೀವಿಗಳು ನಿಜಕ್ಕೂ ಮನುಷ್ಯನಿಗಿಂತ ಬುದ್ಧಿವಂತ ಎಂದರೆ ತಪ್ಪೇನಿಲ್ಲ ಎನಿಸುತ್ತದೆ.




**ಲೇಖನ:** ಕಾರ್ತಿಕಕುಮಾರ ಹೆಗಡೆ
ಉತ್ತರ ಕನ್ನಡ ಜಿಲ್ಲೆ




# ಮೋರೆಗೆ ಕ್ಯಾರೆ ಎನ್ನದ ಶ್ವಾನಗಳು

ಪೂರ್ಣವಿರಾಮವೇ ಇಲ್ಲದೆ ಗೋಳಿಡುವ ನಾಯಿಯ ಕರ್ಕಶ ಧ್ವನಿ ರಾತ್ರಿಯೆಲ್ಲಾ ನಿದ್ದೆ ಇಲ್ಲದ ಹಾಗೆ ಮಾಡಿತ್ತು. ಬೆಳಿಗ್ಗೆಯಾದ ಒಡನೆಯೇ, ಸಾಕಲು ತಂದಿದ್ದ ಆ ನಾಯಿ ಮರಿಯನ್ನು ಪಕ್ಕದ ಊರಿನಲ್ಲಿದ್ದ ನಮ್ಮ ದೊಡ್ಡಪ್ಪನ ಮನೆಗೆ ನನ್ನಕ್ಕಳಿಗೆ ತಿಳಿಯದ ಹಾಗೆ ಸಾಗಿಸಲಾಯಿತು. ಅಂದಿನಿಂದ ಮತ್ತೆ ಆ ಸೊಂಪಾದ ನಿದ್ದೆಗೆ ಜಾರುವ ಅವಕಾಶ ಮರುಕಳಿಸಿತು. ಹೀಗೆಂದುಕೊಳ್ಳುತ್ತಾ ಕಳೆದ ಕೆಲವು ತಿಂಗಳುಗಳಲ್ಲೇ ಇನ್ಯಾವುದೋ ನಾಯಿಮರಿ ನಮ್ಮ ಮನೆಯ ಪಕ್ಕದಲ್ಲಿದ್ದ ನಮ್ಮ ಚಿಕ್ಕಪ್ಪನ ಹೋಟೆಲ್ ಬಳಿ ಓಡಾಡುತ್ತಿರುವ ಬಿಸಿ ಸುದ್ದಿ ಕಿವಿಗೆ ಬಿತ್ತು. 'ಹೋದ್ಯಾ ಗವಾಕ್ಷಿ ಅಂದ್ರೆ, ಬಂದೇ ಪಿಶಾಚಿ' ಅನ್ನೋ ಹಾಗೆ ಇದ್ಯಾವ ನಾಯಿ ನನ್ನ ನಿದ್ದೆ ಕೆಡಿಸಲು ಮತ್ತೆ ವಕ್ಕರಿಸಿತೋ ಎಂದುಕೊಂಡೆ. ಆದರೆ ಹಾಗೇನು ಆಗಲಿಲ್ಲ. ಏಕೆಂದರೆ ಈ ನಾಯಿ ತಾನಾಗಿಯೇ ಎಲ್ಲಿಂದಲೋ ಬಂದಿತ್ತು. ಆದ್ದರಿಂದ ಹಿಡಿದು ಸಾಕಲು ತಂದ ನಮ್ಮ ನಾಯಿಯ ಹಾಗೆ ಇದು ರಾತ್ರಿ ಗೋಳಿಡಲಿಲ್ಲ. ನಮ್ಮ ಚಿಕ್ಕಪ್ಪನ ಹೋಟೆಲಿನ ಹಳಸಲು ರುಚಿ ಕಂಡುಕೊಂಡದ್ದರಿಂದ ಅಲ್ಲಿಯೇ ಅಂದರೆ ನಮ್ಮ ಮತ್ತು ಚಿಕ್ಕಪ್ಪನ ಮನೆಯ ಜಾಗವನ್ನು ತನ್ನ ಸಾಮ್ರಾಜ್ಯವನ್ನಾಗಿಸಿಕೊಂಡಿತು. ಕಪ್ಪು ಕಾಡಿಗೆಯನ್ನು ಒಂದೊಂದೇ ಕೂದಲಿಗೆ ಸವರಿದ ಹಾಗೆ ಮೈಯೆಲ್ಲಾ ಕಪ್ಪು ಬಣ್ಣವಿದ್ದರಿಂದ 'ಕರಿಯ' ಎಂಬ ನಾಮಧೇಯ ತಾನಾಗಿಯೇ ನಮ್ಮ ಬಾಯಿಗಳಲ್ಲಿ ರೂಢಿಯಾಯಿತು. ಹೋಟೆಲಿನ ಊಟಕ್ಕೆ ಚೆನ್ನಾಗಿ ಬೆಳೆದು ಈಗ ಕರಿಯ, ಧಡಿಯನಾಗಿದ್ದಾನೆ. ನಮ್ಮೆರಡು ಮನೆಯ ಯಾವ ಸದಸ್ಯರು ನಡಿಗೆಯಲ್ಲಿ ಹೊರಗೆ ಹೋದರೂ ಅವರ ಜೊತೆ ಓಡಿಬಿಡುತ್ತಾನೆ ಈ ಕಮಂಗಿ. ಬೇರೆ ತರಹದ ನಾಯಿಯಾಗಿದ್ದರೆ ಬಂದರೆ ಬರಲಿ ತೊಂದರೆ ಇಲ್ಲ ಎನ್ನಬಹುದಿತ್ತು. ಆದರೆ ಇವನು ಬಂದರೆ ನಮಗೇ ತೊಂದರೆ. ಹೇಗೆ ಎನ್ನುತ್ತೀರಾ? ಕೇಳಿ...

ಯಾವ ನಾಯಿಯಾದರೂ ಮನೆಯವರ ಜೊತೆ ಬಂದರೆ ಅವರಿಗೆ ತಾನೆ ಧೈರ್ಯ ಹೆಚ್ಚಬೇಕು, ಕತ್ತಲಾದರೂ ಓಡಾಡಬಹುದು ಅನ್ನಿಸಬೇಕು. ಆದರೆ ಇದೆಲ್ಲಾ ಬೇರೆ ಮನೆಯ ನಾಯಿ ಕತೆ. ಈ ಕರಿಯ ನಮ್ಮ ಜೊತೆಗೆ ಬರುವುದೇ ಅವನ ಧೈರ್ಯಕ್ಕೆ ನಾವಿದ್ದೀವೆಂದು. ಹೀಗೆ ಜೊತೆಗೆ ಬಂದು ಬೇರೆ ನಾಯಿಯನ್ನು ಹೋಗಿ ಮೂಸಿ ನೋಡುವುದು, ಗುರ್ ಗುಟ್ಟುವುದು, ಬೊಗಳಿ ಅವುಗಳನ್ನು ರೊಚ್ಚಿಗೇಳಿಸುವುದೇ ಕೆಲಸ. ಇವನ ಈ ಚೇಷ್ಟೆಗೆ ಆ ನಾಯಿ ನಮ್ಮ ಮಾಂಸಖಂಡಗಳಿಗೆ ಎಲ್ಲಿ ಬಾಯಿ ಹಾಕುವುದೋ ಎಂದು ಕೆಲವೊಮ್ಮೆ ಜೀವ ಕೈಯಲ್ಲಿ ಹಿಡಿದಿಟ್ಟುಕೊಳ್ಳಬೇಕಾಗಿರುತ್ತದೆ. ಇಂತಹ ಕುಚೇಷ್ಟೆಗಳನ್ನು ಮಾಡಿದರೂ ಅವನ ಮುಗ್ದ ಮುಖ ನೋಡಿದೊಡನೆ ಇವನ್ನೆಲ್ಲ ಮರೆಸಿಬಿಡುತ್ತದೆ. ಆದರೆ ದುರಾದೃಷ್ಟ ಏನೆಂದರೆ, ನಾವು ನಮ್ಮ ಮುದ್ದಿನ ನಾಯಿಮರಿಗಳ ಮುಖ ಗುರುತಿಸುವಂತೆ ಅವುಗಳಿಗೆ ನಮ್ಮ ಮುಖ ಅಂದರೆ ಮನುಷ್ಯರ ಮುಖ ನೋಡಿ ಗುರುತಿಸಲು ಆಗುವುದಿಲ್ಲವಂತೆ. ಹೀಗೆನ್ನುತ್ತಿದೆ ಹೊಸ ಸಂಶೋಧನೆ. ನಂಬಲು ಸ್ವಲ್ಪ ಕಷ್ಟ ಎನಿಸಿದರೂ ವೈಯಕ್ತಿಕವಾಗಿ

ನನಗೆ ನಂಬಬೇಕೆನಿಸುತ್ತದೆ. ಏಕೆಂದರೆ ವಾರಕ್ಕೊಮ್ಮೆ ಮನೆಗೆ ಹೋಗುವ ನನ್ನನ್ನು ಯಾರೋ ಹೊಸಬನಂತೆ ನೋಡುವ ನಮ್ಮ ಕರಿಯ, ಹೆಸರಿಡಿದು 'ಕರಿಯ' ಎಂದ ತಕ್ಷಣ ಕುಣಿಯುತ್ತಾನೆ. ನಾವು ಮನುಷ್ಯರು ಇನ್ನೊಬ್ಬರ ಮುಖಭಾವದಿಂದಲೇ ಅವರು ಏನನ್ನು ಹೇಳುತ್ತಿದ್ದಾರೆಂದು ಅರಿತುಬಿಡುತ್ತೇವೆ. ಮುಖದ ಮೇಲಿನ ಒಂದೊಂದು ಸನ್ನೆಯೂ ಒಂದೊಂದು ಅರ್ಥವನ್ನು ಕೊಡುತ್ತದೆ ಅಲ್ಲವೇ? ಆದರೆ ನಾಯಿಗಳ ವಿಷಯಕ್ಕೆ ಬಂದರೆ ಹೀಗಿಲ್ಲ. ನಾಯಿಗಳಿಗೆ ಇತರ ನಾಯಿಗಳ ಮುಖವಾಗಲಿ ಅಥವಾ ಮನುಷ್ಯರ ಮುಖವಾಗಲಿ ನೋಡಿದರೆ ನೆನಪು ಬರುವುದು, ಗುರುತಿಸುವುದು ದೂರದ ಮಾತು ಎನ್ನುತ್ತಿದೆ ಈ ಸಂಶೋಧನೆ. ಮೆಕ್ಸಿಕೋದ ಕೆಲವು ವಿಜ್ಞಾನಿಗಳು ಮೆದುಳನ್ನು ಸ್ಕ್ಯಾನ್ ಮಾಡುವ ತಂತ್ರಜ್ಞಾನವನ್ನು (ಎಮ್ ಆರ್ ಐ) ಬಳಸಿಕೊಂಡು 20 ನಾಯಿಗಳ ಮೇಲೆ ಈ ಪ್ರಯೋಗ ಮಾಡಿದ್ದಾರೆ. ನಾಯಿಗಳನ್ನು ಎಮ್. ಆರ್. ಐ ಸ್ಕ್ಯಾನರ್ ಮೂಲಕ ಕಳಿಸುವಾಗ 4 ಬಗೆಯ 2 ಸೆಕೆಂಡುಗಳ ವೀಡಿಯೋವನ್ನು ತೋರಿಸುತ್ತಿದ್ದರು. ಒಂದು ಮನುಷ್ಯರ ಮುಖ, ಎರಡು ಮನುಷ್ಯರ ತಲೆಯ ಹಿಂಭಾಗ. ಹೀಗೆ ನಾಯಿಗಳ ಮುಖ ಮತ್ತು ತಲೆಯ ಹಿಂಭಾಗವನ್ನು ತೋರಿಸಲಾಯಿತು.

ಇದೇ ಪ್ರಯೋಗವನ್ನು 30 ಜನ ಸ್ವಯಂಸೇವಕರ ಮೇಲೂ ನಡೆಸಲಾಯಿತು. ಆಶ್ಚರ್ಯ ಎಂದರೆ, ಮನುಷ್ಯರು ತಮ್ಮದೇ ಪ್ರಭೇದದ ಮತ್ತು ನಾಯಿಗಳ ಮುಖದ ಚಿತ್ರ ಕಂಡಾಗ ಅವರ ಮೆದುಳಿನಲ್ಲಿ ನರಗಳ ಚಟುವಟಿಕೆ ಹೆಚ್ಚಾಗಿತ್ತು. ಮುಖದ ಹಿಂಭಾಗ ಕಂಡಾಗ ನರಗಳ ಚಟುವಟಿಕೆ ಕಡಿಮೆಯೇ ಇತ್ತು. ಅಂದರೆ ಮನುಷ್ಯರು ಮುಖವನ್ನು ಕಂಡರೆ ಹೆಚ್ಚಾಗಿ ಪ್ರತಿಕ್ರಿಯಿಸುತ್ತಾರೆ ಎಂದಾಯಿತು. ಈಗ ನಾಯಿಗಳ ವಿಷಯಕ್ಕೆ ಬಂದರೆ, ಮುಖಗಳು ಮತ್ತು ತಲೆಯ ಹಿಂಭಾಗ ನೋಡಿದ ಎರಡೂ ಸಮಯದಲ್ಲೂ ನಾಯಿಗಳ ನರಗಳ ಚಟುವಟಿಕೆ ಗಮನಾರ್ಹವಾಗಿರಲಿಲ್ಲ. ಅಂದರೆ ನಾಯಿಗಳು ಮುಖ ಕಂಡರೂ ಕ್ಯಾರೆ ಎನ್ನುತ್ತಿಲ್ಲ ಎಂದಾಯಿತು.

ಆದರೆ ಇಲ್ಲಿ ನಾವು ಗಮನಿಸಬೇಕಾದದ್ದು, ಈ ಸಂಶೋಧನೆ ನಾಯಿಗಳ ನರಗಳ ಚಟುವಟಿಕೆಯನ್ನು ಮಾತ್ರ ತೋರಿಸುತ್ತದೆ, ಅವುಗಳ ನಡವಳಿಕೆಯನ್ನಲ್ಲ. ಆದ್ದರಿಂದ ಈ ಸಂಶೋಧನೆಯ ಆಧಾರದ ಮೇಲೆ ನಾವು ಯಾವುದೇ ಕಡಾಖಂಡಿತ ನಿರ್ಧಾರಗಳನ್ನು ತೆಗೆದುಕೊಳ್ಳಲಾಗುವುದಿಲ್ಲ. ಜೊತೆಗೆ ಬೇರೆ ಸಂಶೋಧನೆಗಳು ನಾಯಿಗಳು ಮನುಷ್ಯರ ಮುಖ ನೋಡಿಯೇ ತಮ್ಮ ನಡವಳಿಕೆಯನ್ನು ಬದಲಾಯಿಸಿವೆ ಎಂದೂ ಹೇಳುತ್ತವೆ. ಆದ್ದರಿಂದ ಈ ಸಂಶೋಧನೆ ಶ್ವಾನಗಳು ಈ ಪ್ರಪಂಚವನ್ನು ನೋಡುವ ವಿಧಾನವನ್ನು ನಾವು ಅರಿಯುವ ದಾರಿಗೆ ಒಂದು ಸಣ್ಣ ಸಲಹೆಯಷ್ಟೇ. ಶ್ವಾನಗಳು ಈ ಪ್ರಪಂಚವನ್ನು ಹೇಗೆ ನೋಡುತ್ತವೆ ಎನ್ನುವುದು, ನಮಗೆ ಇನ್ನೂ ಉತ್ತರ ಸಿಗದ ಯಕ್ಷ ಪ್ರಶ್ನೆ.

**ಮೂಲ ಲೇಖನ:** ScienceNewsforStudents



**ಲೇಖನ:** **ಜೈಕುಮಾರ್ ಆರ್.**
**ಡಬ್ಲ್ಯೂ.ಸಿ.ಜಿ. ಬೆಂಗಳೂರು**



# ವಸುಂಧರೆಯ ಮಡಿಲು

ಓ ಜನನಿ, ನಿನ್ನ ಹರಿದ್ವರ್ಣದ ಜೋಕಾಲಿಯಲಿ
ತರುಲತೆಗಳ  ಸುಮಧುರ ಜೋಗುಳದಲಿ
ಮಿಂದು ಅಂಕುರಿಸಿದೆವಮ್ಮ ನಿನ್ನ ಮಡಿಲಿನಲಿ

ಭೋರ್ಗರೆದು ಹರಿವ ಅಮೃತಧಾರೆಯ ಸವಿದು
ಸ್ವಚ್ಛಂದದ ಮಣ್ಣಿನಲಿ ಆಡಿ, ನಲಿದು
ಬೆಳೆದು ನಿಂತೆವಮ್ಮಾ , ನಿನ್ನ ಮಮತೆಗೆ ಮಿಡಿದು

ದುಷ್ಟ-ದುರುಳರು ಬಗೆದು ಆಳಿದರೂ, ನಿನ್ನ ಒಡಲ
ಮುನ್ನಡೆಸುತಿರುವೆ ಕೊಟ್ಟು ನಿನ್ನ ಹೆಗಲ
ಹೇಗೆ ವರ್ಣಿಸಲಿ ತಾಯೆ, ನಿನ್ನೀ ತ್ಯಾಗದ ಅನಲ!

ರಕ್ಕಸರಂತೆ ಕೆಡವಿದೆವು ನಿನ್ನನು ಅಧಃಪತನದೆಡೆಗೆ
ರಕ್ಷಿಸುವ ಅನಿವಾರ್ಯತೆಯು ಎಮಗೆ ನಿನ್ನ ಉಳಿವಿಗೆ
ಆಗಲೇ ಉಳಿದಾವು ಸಕಲ ಜೀವರಾಶಿಗಳು ಹಲವು  ಬಗೆ.

- ದೀಪ್ತಿ ಎನ್,
ಬಂಗಾರಪೇಟೆ ಕೋಲಾರ ಜಿಲ್ಲೆ

© ಮಮತ ಆರ್.



**ನತ್ತಿಂಗ** ©ನಾಗೇಶ್ ಓ. ಎಸ್.

ನತ್ತಿಂಗ ಪಕ್ಷಿಯು ದಕ್ಷಿಣ ಏಷ್ಯಾ ಮತ್ತು ಆಗ್ನೇಯ ಏಷ್ಯಾದಾದ್ಯಂತ ಕಂಡುಬರುತ್ತದೆ. ನೆಲದ ಮೇಲೆ ವಾಸಿಸುವ ಈ ನತ್ತಿಂಗ ಪಕ್ಷಿಯನ್ನು ಮುಂಜಾನೆ ಮತ್ತು ಮುಸ್ಸಂಜೆಯ ವಿಶಿಷ್ಟ ಕೂಗಿನಿಂದ ಸುಲಭವಾಗಿ ಪತ್ತೆಹಚ್ಚಬಹುದು. ಇದರ ಬಣ್ಣ ಮರದ ತೊಗಟೆಗೆ ಹಾಗೂ ತರಗೆಲೆಗಳಿಗೆ ಹೋಲುವುದರಿಂದ ಪತ್ತೆಹಚ್ಚುವುದು ಕಷ್ಟಸಾಧ್ಯ. ಇದು ಗೂಬೆಯಂತೆ ನಿಶಾಚರಿ ಹಕ್ಕಿಯಾಗಿದ್ದು, ಮುಸ್ಸಂಜೆ ನಂತರ ಮೆಲುದನಿಯ ಕೂಗಿನಿಂದ ಇದರ ಚಟುವಟಿಕೆ ಆರಂಭ. ಇದರ ಕೂಗು ಚುಳುಕ್... ಚುಳುಕ್... ಚುಳುಕ್... ಎಂದು ನೀರಿನಲ್ಲಿ ಕಲ್ಲು ಹಾಕಿದಾಗ ಶಬ್ದ ಬಂದಂತೆ ಇರುತ್ತದೆ. ಕುರುಚಲು ಕಾಡು, ಬಂಡೆ ಪ್ರದೇಶ, ಬಂಡೆನೆಲೆದ ಮೇಲೆ ಇದರ ವಾಸ. ಇದರ ಆಹಾರ ರಾತ್ರಿ ಸಮಯದಲ್ಲಿ ಹಾರಾಡುವ ಕೀಟಗಳು, ದುಂಬಿ, ರೆಕ್ಕೆಗೊದ್ದ, ಪತಂಗ, ಮಿಡತೆ, ಕಂಬಳಿಹುಳು, ಕೀಟಗಳು ಮತ್ತು ಕೀಟಗಳ ಮೊಟ್ಟೆಯೂ ಹೌದು. ಕೆಲವು ಸಲ ಸೊಳ್ಳೆಗಳನ್ನು ಸಹ ಭಕ್ಷಿಸುತ್ತವೆ. ಈ ಪಕ್ಷಿಯು ಗೂಡು ಕಟ್ಟದೆ ನೆಲದ ಮೇಲೆ ಫೆಬ್ರುವರಿಯಿಂದ ಸೆಪ್ಟೆಂಬರ್ ನ ಅವಧಿಯಲ್ಲಿ ಎರಡು ಕೆನೆ ಗುಲಾಬಿಯ ಬಣ್ಣದ ಮೊಟ್ಟೆಗಳನ್ನಿಟ್ಟು ಮರಿ ಮಾಡುತ್ತದೆ. ಆಗಾಗ ರಸ್ತೆಯ ಮೇಲೆ ವಾಹನದ ಬೆಳಕಿಗೆ ಕಣ್ಣುಗಳು ಕೆಂಪಗೆ ಮಿನುಗಿದಾಗ ಅವುಗಳನ್ನು ಗುರುತಿಸಬಹುದು.



**ಕೆನ್ನೀಲಿ ಬಕ** **©ನಾಗೇಶ್ ಓ. ಎಸ್.**

ನೇರಳೆ ಬಣ್ಣದ ಮೈಬಣ್ಣದಿಂದ ಇದು ಕೆನ್ನೀಲಿ ಬಕ ಎಂದು ಹೆಸರು ಪಡೆದುಕೊಂಡಿದೆ. ಈ ಪಕ್ಷಿಯು ನಿಂತಾಗ ಸುಮಾರು 70 ರಿಂದ 94 ಸೆಂ. ಮೀ. ಎತ್ತರ ಹಾಗೂ ಮುಂಭಾಗದಿಂದ ಹಿಂಭಾಗಕ್ಕೆ 78 ರಿಂದ 97 ಸೆಂ. ಮೀ. ಉದ್ದ ಮತ್ತು 120 ರಿಂದ 152 ಸೆಂ.ಮೀ. ರೆಕ್ಕೆಯ ಅಗಲ ಹೊಂದಿದೆ. ಇದು ಜೌಗುಪ್ರದೇಶ, ನದಿ ತೀರಗಳು, ದ್ವೀಪಗಳು, ಹಳ್ಳಕೊಳ್ಳಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಹಾರಾಟದ ವಿಶೇಷತೆ ಏನೆಂದರೆ ಕುತ್ತಿಗೆಯನ್ನು ಹಿಂತೆಗೆದುಕೊಂಡು ಕಾಲುಗಳನ್ನು ಬಾಲದ ಹಿಂದೆ ಬಹಳ ದೂರ ವಿಸ್ತರಿಸಿ ನಿಧಾನವಾಗಿ ಹಾರುತ್ತವೆ. ಕಡ್ಡಿಗಳಿಂದ ಬಹಳ ದೊಡ್ಡ ಗೂಡು ನಿರ್ಮಿಸಿ 4 ಅಥವಾ 5 ನೀಲಿ-ಹಸಿರು ಮೊಟ್ಟೆಗಳನ್ನು ಇಟ್ಟು ಮರಿ ಮಾಡುತ್ತದೆ.



**ಕಪ್ಪು ಬಿಳಿ ಬೇಲಿಚಟಕ** **©ನಾಗೇಶ್ ಓ. ಎಸ್.**

ಕಪ್ಪುಬಿಳಿ ಬೇಲಿಚಟಕವು ಹಳ್ಳಿ ಪ್ರದೇಶಗಳಲ್ಲಿ, ತೆರೆದ ಹುಲ್ಲುಗಾವಲುಗಳಲ್ಲಿ ಏಷ್ಯಾದಾದ್ಯಂತ ಕಂಡುಬರುವ ಸಣ್ಣ ಪಕ್ಷಿಯಾಗಿದೆ. ಚಿಕ್ಕ ಕಲ್ಲಿನ ಕುಳಿಗಳಲ್ಲಿ, ಹುಲ್ಲಿನ ಮೆದೆಗಳಲ್ಲಿ, ಹುಲ್ಲು ಮತ್ತು ಪ್ರಾಣಿಗಳ ಕೂದಲಿನಿಂದ ಗೂಡು ಕಟ್ಟುತ್ತದೆ. ಗಂಡು ಪಕ್ಷಿಯು ಕಪ್ಪು ಬಣ್ಣ ಹೊಂದಿದ್ದು ಬಿಳಿ ಭುಜವನ್ನು ಹೊಂದಿರುತ್ತದೆ ಹಾಗೂ ಹೆಣ್ಣು ಪಕ್ಷಿಯು ಕಂದು ಬಣ್ಣದ್ದಾಗಿರುತ್ತದೆ. ಇವು 2 ಅಥವಾ 3 ತಿಳಿ ನೀಲಿ ಬಿಳಿ ಅಥವಾ ಗುಲಾಬಿ ಬಣ್ಣದ ಮೊಟ್ಟೆಗಳನ್ನಿಟ್ಟು ಮರಿ ಮಾಡುತ್ತವೆ.



**ಕಪ್ಪು ಬೆನ್ನಿನ ಮರಕುಟಿಗ** **©ನಾಗೇಶ್ ಓ. ಎಸ್.**

ಕಪ್ಪು ಬೆನ್ನಿನ ಮರಕುಟಿಗ ಪಕ್ಷಿಗಳು ಸಾಮಾನ್ಯವಾಗಿ ಭಾರತದೆಲ್ಲೆಡೆ ಕಂಡು ಬರುತ್ತವೆ. ಇವುಗಳು ಮರಗಳಲ್ಲಿ ರಂಧ್ರ ಕೊರೆದು ಒಂದು ಅಥವಾ ಎರಡು ಬಿಳಿ ಮೊಟ್ಟೆಗಳನ್ನು ಇಟ್ಟು ಮರಿ ಮಾಡುತ್ತದೆ. 29 ಸೆಂ.ಮೀ. ಉದ್ದವಿರುವ ಈ ಪಕ್ಷಿಗಳ ಕುತ್ತಿಗೆಯ ಹಿಂಭಾಗದ ಬಿಳಿ ಬಣ್ಣವು ಹಾಗೂ ಭುಜದ ಮೇಲಿರುವ ಕಪ್ಪು ಬಣ್ಣದ ಚುಕ್ಕಿಗಳು ಸೇರಿ 'ವಿ' ಆಕಾರವನ್ನು ಸೃಷ್ಟಿಸುತ್ತವೆ. ಬಾಲ ಕಪ್ಪಗಿದ್ದು, ಹೊಟ್ಟೆಯ ಕೆಳಭಾಗ ಚುಕ್ಕಿ ಚುಕ್ಕಿ ಗುರುತಿರುವ ಬಿಳಿ ಬಣ್ಣದಿಂದ ಕೂಡಿದ್ದರೆ, ಉಳಿದ ದೇಹದ ಭಾಗವು ಚಿನ್ನದ ಬಣ್ಣದಿಂದ ಕೂಡಿರುತ್ತದೆ. ತಲೆಯು ಬಿಳಿ ಬಣ್ಣದ ಜೊತೆಗೆ ಮೀಸೆಯಂತಹ ಅಡ್ಡ ಪಟ್ಟೆಗಳಿಂದಲೂ ಹಾಗೂ ಕಣ್ಣಿನ ಕಪ್ಪು ಗೆರೆಯೂ ಕುತ್ತಿಗೆಯವರೆಗೂ ಮುಂದುವರೆಯುತ್ತವೆ. ಉದ್ದನೆಯ ಕೊಕ್ಕಿನ ಜೊತೆಗೆ ಬಲವಾದ ಬಾಲವು ರೆಂಬೆ ಕೊಂಬೆಗಳ ಮೇಲೆ ಆಧಾರಕ್ಕಾಗಿ ಸಹಾಯ ಮಾಡುತ್ತವೆ. ಕಾಲಿನ ಎರಡು ಬೆರಳುಗಳು ಮುಂದಕ್ಕೆ ಹಾಗೂ ಎರಡು ಹಿಂದಕ್ಕೆ ಚಾಚಿಕೊಂಡಿವೆ. ಗಂಡಿಗೆ ಬಿಳಿ ತಲೆ ಮೇಲೆ ಕೆಂಪು ಕಿರೀಟವಿದ್ದರೆ ಹೆಣ್ಣಿಗೆ ಹಳದಿ ಕಿರೀಟವಿರುತ್ತದೆ. ಮರಿಗಳು ಹೆಣ್ಣು ಪಕ್ಷಿಯನ್ನು ಹೋಲುತ್ತವೆ.

**ಛಾಯಾಚಿತ್ರ: ನಾಗೇಶ್ ಓ. ಎಸ್.**

**ಲೇಖನ: ನವೀನ್ ಕುಮಾರ್ ನಾಯ್ಕ್**

# ನೀವೂ ಕಾನನಕ್ಕೆ ಬರೆಯಬಹುದು




ಭೂಮಿಯು ಅಸಂಖ್ಯಾತ ಪ್ರಭೇದದ ಪ್ರಾಣಿ ಮತ್ತು ಸಸ್ಯಗಳಿಗೆ ನೆಲೆಯಾಗಿದೆ. ವನ್ಯಜೀವಿ ಸಾಂಪ್ರದಾಯಿಕವಾಗಿ ಪ್ರಾಣಿ ಪ್ರಭೇದಗಳನ್ನು ಸೂಚಿಸುತ್ತದೆ. ಮರುಭೂಮಿಗಳು, ಕಾಡುಗಳು, ಮಳೆಕಾಡುಗಳು, ಬಯಲು ಪ್ರದೇಶಗಳು, ಹುಲ್ಲುಗಾವಲುಗಳು ಮತ್ತು ಇತರ ಪ್ರದೇಶಗಳು ಸೇರಿದಂತೆ, ಇವೆಲ್ಲವೂ ವಿಭಿನ್ನ ರೀತಿಯ ವನ್ಯಜೀವಿಗಳನ್ನು ಹೊಂದಿವೆ. ಕಾಡಿನಲ್ಲಿ ವಾಸಿಸುವ ಪ್ರಾಣಿಗಳು ಮತ್ತು ಸಸ್ಯಗಳು ಪ್ರತಿಯೊಂದೂ ಆಂತರಿಕ ಮೌಲ್ಯವನ್ನು ಹೊಂದಿವೆ ಮತ್ತು ಪರಿಸರದಲ್ಲಿ, ಆನುವಂಶಿಕ, ಸಾಮಾಜಿಕ, ಆರ್ಥಿಕ, ವೈಜ್ಞಾನಿಕ, ಶೈಕ್ಷಣಿಕ, ಸಾಂಸ್ಕೃತಿಕ, ಮನರಂಜನೆ ಮತ್ತು ಸೌಂದರ್ಯದ ಅಂಶಗಳಿಗೆ ಮತ್ತು ಸುಸ್ಥಿರ ಅಭಿವೃದ್ಧಿಗೆ ಕೊಡುಗೆ ನೀಡುತ್ತವೆ.

ನಾವು ಉಸಿರಾಡುವ ಗಾಳಿ, ತಿನ್ನುವ ಆಹಾರ, ಬಳಸುವ ಶಕ್ತಿ ಮತ್ತು ಎಲ್ಲಾ ಉದ್ದೇಶಗಳಿಗಾಗಿ ನಮ್ಮ ಎಲ್ಲಾ ಅಗತ್ಯಗಳಿಗಾಗಿ ನಾವು ಜೀವಗೋಳದ ಎಲ್ಲಾ ಅಂಶಗಳ ಮೇಲೆ ನಿರಂತರವಾಗಿ ಅವಲಂಬಿತವಾಗಿದ್ದೇವೆ. ಸಮರ್ಥನೀಯವಲ್ಲದ ಮಾನವ ಚಟುವಟಿಕೆಗಳು ನೈಸರ್ಗಿಕ ಸಂಪನ್ಮೂಲಗಳ ಅತಿಯಾದ ಶೋಷಣೆ ವಿಶ್ವದ ಜೀವವೈವಿಧ್ಯತೆಯನ್ನು ದುರ್ಬಲಗೊಳಿಸುತ್ತಿದೆ. ಹೆಚ್ಚಿದ ಮಾನವ ಚಟುವಟಿಕೆಗಳಿಂದ ವನ್ಯಜೀವಿಗಳ ಮೇಲೆ ಹೆಚ್ಚಿನ ಪರಿಣಾಮ ಬೀರುತ್ತವೆ ಎಂದು ವಿಜ್ಞಾನಿಗಳು ಒಪ್ಪುತ್ತಾರೆ.

ಆಧುನಿಕ ಕಾಲದಲ್ಲಿ, ಮಾನವನ ಅನುಕೂಲಕ್ಕಾಗಿ ಅಥವಾ ಮನರಂಜನೆಗಾಗಿ ವನ್ಯಜೀವಿಗಳ ಶೋಷಣೆಯನ್ನು ತಡೆಯಲು, ಕಾಡು ಪ್ರಾಣಿಗಳು ಮತ್ತು ಸಸ್ಯಗಳ ಪ್ರಭೇದಗಳ ಸಂರಕ್ಷಣೆ ಮತ್ತು ಸುಸ್ಥಿರ ಬಳಕೆಗಳ ಬಗ್ಗೆ ಅರಿವು ಮೂಡಿಸಲು ಮಾರ್ಚ್ 3 ನ್ನು ವಿಶ್ವ ವನ್ಯ ಜೀವಿ ದಿನವನ್ನಾಗಿ ಆಚರಿಸಲಾಗುತ್ತದೆ.

ಈ ರೀತಿಯ ಪರಿಸರದ ಬಗೆಗಿನ ಮಾಹಿತಿಯನ್ನು ಒದಗಿಸಲು ಇರುವ ಕಾನನ ಇ-ಮಾಸಿಕಕ್ಕೆ ಮುಂದಿನ ತಿಂಗಳ ಪ್ರತಿಗೆ ಲೇಖನಗಳನ್ನು ಆಹ್ವಾನಿಸಲಾಗಿದೆ. ಆಸಕ್ತರು ಪರಿಸರಕ್ಕೆ ಸಂಬಂಧಿಸಿದ ಕಥೆ, ಕವನ, ಛಾಯಾಚಿತ್ರ, ಚಿತ್ರಕಲೆ, ಪ್ರವಾಸ ಕಥನಗಳನ್ನು ಕಾನನ ಮಾಸಿಕದ ಇ-ಮೇಲ್ ವಿಳಾಸಕ್ಕೆ ಕಳುಹಿಸಬಹುದು.

**ಕಾನನ ಪತ್ರಿಕೆಯ ಇ-ಮೇಲ್ ವಿಳಾಸ**: kaanana.magwork@gmail.com

**ಅಂಚೆ ವಿಳಾಸ**:

Study House,

ಕಾಳೇಶ್ವರಿ ಗ್ರಾಮ,

ಆನೇಕಲ್ ತಾಲ್ಲೂಕು,

ಬೆಂಗಳೂರು ನಗರ ಜಿಲ್ಲೆ,

ಪಿನ್ ಕೋಡ್ :560083. ಗೆ ಕಳಿಸಿಕೊಡಬಹುದು.